# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1337

ಉತ್ತರಿಸಬೇಕಾದ ದಿನಾಂಕ : 21.12.2018.

ಸದಸ್ಯರ ಹೆಸರು : ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ಇತ್ತೀಚೆಗೆ ಸಂಭವಿಸಿದ ಪ್ರವಾಹ ಮತ್ತು ಭೂಕುಸಿತದಿಂದಾಗಿ ಕ್ರೀಡಾಂಗಣಗಳು ಹಾನಿಗೊಳಗಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಕೊಡಗು ಜಿಲ್ಲೆಯಲ್ಲಿ ಇತ್ತೀಚೆಗೆ ಸಂಭವಿಸಿದ ಪ್ರವಾಹ ಮತ್ತು ಭೂಕುಸಿತದಿಂದಾಗಿ ಮಡಿಕೇರಿಯ ಈಜುಕೊಳದ ಮೋಟಾರ್ ಪಂಪ್ ಮತ್ತು ಟೈಲ್ಸ್‌ಗಳಿಗೆ ಹಾನಿಯಾಗಿರುತ್ತದೆ. ಮೋಟಾರ್ ಪಂಪ್ ಈಗಾಗಲೇ ದುರಸ್ಥಿಪಡಿಸಲಾಗಿದ್ದು, ಈಜುಕೊಳದ ತಳಭಾಗಕ್ಕೆ ಆಗಿರುವ ಹಾನಿಯನ್ನು ಸರಿಪಡಿಸಲು ಈಗಾಗಲೇ ಜಿಲ್ಲಾ ಪಂಚಾಯತ್ ವಲಯದಡಿ ಅನುದಾನ ನಿಗಧಿಪಡಿಸಲಾಗಿದ್ದು, ಶೀಘ್ರ ದುರಸ್ಥಿ ಕಾಮಗಾರಿ ಕೈಗೊಳ್ಳಲಾಗುವುದು. ಅಲ್ಲದೇ, ಮಡಿಕೇರಿಯ ಒಳಾಂಗಣ ಷಟಲ್ ಬ್ಯಾಡ್ಮಿಂಟನ್ ಹಾಲ್‌ಗೆ ಆಗಿರುವ ಹಾನಿಯನ್ನು ಸರಿಪಡಿಸಲು ಸಹ ಕ್ರಮವಹಿಸಲಾಗುತ್ತಿದೆ. |
| ಇ) | ಯಾವ ಕಾಲಮಿತಿಯೊಳಗೆ ಸದರಿ ಕ್ರೀಡಾಂಗಣಗಳನ್ನು ದುರಸ್ಥಿ ಮಾಡಲಾಗುವುದು; | ಮಡಿಕೇರಿ ಪಟ್ಟಣದ ಈಜುಕೊಳದ ತಳಭಾಗಕ್ಕೆ ಆಗಿರುವ ಹಾನಿಯನ್ನು ದುರಸ್ಥಿಪಡಿಸುವ ಬಗ್ಗೆ ಈಗಾಗಲೇ ಈಜುಕೊಳದ ನೀರನ್ನು ತೆರವುಗೊಳಿಸಿ, ಸ್ಥಳಪರಿಶೀಲನೆ ಮಾಡಲಾಗಿದೆ. ಶೀಘ್ರ ಅಂದಾಜು ಪಟ್ಟಿಯನ್ನು ಸಿದ್ಧಪಡಿಸಿ, ದುರಸ್ಥಿ ಕಾಮಗಾರಿಯನ್ನು ಆರಂಭಿಸಿ, ಪೂರ್ಣಗೊಳಿಸಲಾಗುವುದು. |
| ಈ) | ಸದರಿ ಕ್ರೀಡಾಂಗಣಗಳ ಅಭಿವೃದ್ಧಿಗೆ ಸರ್ಕಾರ ವಿಶೇಷ ಅನುದಾನ ಒದಗಿಸಿ, ಕಾಮಗಾರಿಗಳನ್ನು ಅನುಷ್ಠಾನಗೊಳಿಸುವುದೇ? | ಸದರಿ ಕ್ರೀಡಾಂಗಣಗಳ ದುರಸ್ಥಿಗೆ ಜಿಲ್ಲಾ ಪಂಚಾಯತ್ ವಲಯದಲ್ಲಿ ಲಭ್ಯವಿರುವ ಅನುದಾನವನ್ನು ಬಳಕೆ ಮಾಡಲಾಗುತ್ತಿದ್ದು, ಹೆಚ್ಚುವರಿ ಅನುದಾನದ ಅಗತ್ಯವಿದ್ದಲ್ಲಿ ಪರಿಗಣಿಸಲಾಗುವುದು. |

ಸಂಖ್ಯೆ: ಯುಸೇಇ 101 ಯುಸೇಭಾ 2018.

(ಡಾ|| ಜಿ. ಪರಮೇಶ್ವರ)
ಉಪ ಮುಖ್ಯಮಂತ್ರಿ.